ಎಂ. ಎನ್. ಪ್ರಭಾಕರ್

# ಹೊಯ್ಸಳರ ಕಾಲದ ರಾಜಕೀಯ ವ್ಯವಸ್ಥೆ : ಕೆಲವು ಟಿಪ್ಪಣಿಗಳು

ಮೊದಲೊಳ್ ಸಾಮಂತರಿನಿ
ಸುದಿತೋದಿತನಾಗಿ ಮಂಡಳೇಶ್ವರನಿಂದ-
ಭ್ಯುದಯಂಪರನೆನಿಸಿ ಚಕ್ರಿಯಿಂ-
ನುದಯಂ ಪರಂಪರೆಯಿಂ ನೆಯ್ದಿದಂ ಕವಿರತ್ನಂ[1]

ರನ್ನ ಕವಿಚಕ್ರವರ್ತಿಯ ಗದಾಯುದ್ಧ ಕಾವ್ಯದಲ್ಲೊಂದು ಪದ್ಯ ; ಸಾಮಂತ-ಮಂಡಳೇಶ್ವರ-ಚಕ್ರಿ (ಚಕ್ರವರ್ತಿ)ಯರ ಪರಂಪರೆಯನ್ನು ಅಥವಾ ಆರೋಹಣ ಕ್ರಮವನ್ನು ಪರೋಕ್ಷವಾಗಿ ಗುರುತಿಸಿದೆ. ಅಜಿತ ಪುರಾಣದ ಮತ್ತೊಂದು ಪದ್ಯವು ಸಾಮಂತ-ಮಂಡಳಿಕ-ಚಕ್ರವರ್ತಿಗಳನ್ನು ಕ್ರಮವಾಗಿ ಗುರುತಿಸಿದೆ :

ಕೊಂಡಾಟದ ಸಾಮಂತರ
ಮಂಡಳಿಕರ ಸಕಳ ಚಕ್ರವರ್ತಿಗಳ
ಸಭಾಮಂಡಳದೊಳುಭಯ ಕವಿಮುಖ
ಮಂಡನಮಾಗಿರ್ಪ ರತ್ನಮಿಂ ಕವಿರತ್ನಂ [2]

ಕ್ರಿ. ಶ. ಹತ್ತನೆಯ ಶತಮಾನದ ರನ್ನ ಕವಿಗೆ ಚಾಲುಕ್ಯ ಚಕ್ರವರ್ತಿ ಆಶ್ರಯದಾತ. "ಕೃತಿ ನೆಗಟ್ದಿ ಗದಾಯುದ್ಧ ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ"[3] ಎಂಬ ಒಕ್ಕಣೆ ಚಾಲುಕ್ಯ ಚಕ್ರವರ್ತಿಯನ್ನು ಸ್ಮರಿಸುತ್ತದೆ.

ಕ್ರಿ.ಶ. ಆರನೆಯ ಶತಮಾನದಲ್ಲಿ ಉತ್ತರ ಗುಜರಾತಿನಿಂದ ಕರ್ನಾಟಕಕ್ಕೆ ಬಂದು ಪ್ರಸಿದ್ಧ ದೊರೆತನ ಸ್ಥಾಪಿಸಿದ ಕೀರ್ತಿ ಚಾಲುಕ್ಯರಿಗೆ ಸಲ್ಲುತ್ತದೆಂದು ಪೂರ್ವ ಚಾಲುಕ್ಯರ ವಲಸೆಯನ್ನು ಡಾ॥ ಶಿವರಾಮ ಕಾರಂತರು ಗುರುತಿಸುತ್ತಾರೆ.[4] ಪ್ರಾಚೀನ ಕರ್ನಾಟಕದ ಆಡಳಿತ ವ್ಯವಸ್ಥೆಯನ್ನು ವಿವರಿಸುತ್ತಾ ಡಾ॥ ಚಿದಾನಂದಮೂರ್ತಿಯವರು, 'ಹೇರಿಲಾಳ ಕನ್ನಡ ಸಂಧಿವಿಗ್ರಹಿ' ಎಂಬ ಶಾಸನಪಾಠವು, ಲಾಟ ಅಥವಾ ಲಾಳ ಈಗಿನ ಗುಜರಾತನ್ನು ಸೂಚಿಸುವುದೆಂದೂ ಈ ಹೆಸರಿನ ಸಂಧಿವಿಗ್ರಹಿಗಳು ಲಾಟ ಹಾಗೂ ಕರ್ನಾಟಕ ದೇಶಗಳ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರೆಂದೂ ಅಭಿಪ್ರಾಯ ಪಡುತ್ತಾರೆ.[5] ಲಾಳ ಸಂಧಿವಿಗ್ರಹಿಯಾಗಿದ್ದ ರವಿದೇವನನ್ನು "ಇಂತೆನೆ ಮೂಱುಂ ರಾಜ್ಯದೊಳಂ ತಾನೆ ಚಾಳುಕ್ಯನೃಪರ್ಗೆ ಕೈಗನ್ನಡಿಯಾದಂ ತನ್ನ ಗುಣದಿನ್" ಎಂಬ ವಿವರವು ಕ್ರಿ.ಶ. ೯೭೩ ರಿಂದ ಕ್ರಿ. ಶ. ೧೨೦೦ರವರೆಗೆ ಆಳಿದ ಕಲ್ಯಾಣದ ಚಾಲುಕ್ಯರು, ಆಂಧ್ರದಲ್ಲಿದ್ದ ಮೂಡಣ

1 ತೀ. ನಂ. ಶ್ರೀಕಂಠಯ್ಯ (ಸಂ.) : ರನ್ನಕವಿ ಗದಾಯುದ್ಧ ಸಂಗ್ರಹಂ, ಮೈಸೂರು, ೧೯೭೨, ಪು. ೨-೩

2 ಅದೇ, ಅನುಬಂಧ : ಅಜಿತಪುರಾಣದ ಕೆಲವು ಪದ್ಯಗಳು, ಪು. ೨೦೯

3 ಅದೇ, ಪು. ೨

4 ಚಾಲುಕ್ಯ ವಾಸ್ತು ಮತ್ತು ಶಿಲ್ಪ, ಬೆಂಗಳೂರು, ೧೯೬೯, ಪು.೧

5 ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೬೬, ಪು. ೩೩೩

ಚಾಲುಕ್ಯರು ಮತ್ತು ಕ್ರಿ.ಶ. ೯೪೧ ರಿಂದ ಕ್ರಿ.ಶ. ೧೩೦೦ ರವರೆಗೆ ಗುಜರಾತಿನಲ್ಲಿದ್ದ ಚಾಲುಕ್ಯರ ಪರಸ್ಪರ ಸಂಬಂಧ ವನ್ನು ಸೂಚಿಸುವುದೆಂದು ಡಾ॥ ಚಿದಾನಂದಮೂರ್ತಿ ಯವರು ಗುರುತಿಸುತ್ತಾರೆ.[6] ಈ ಬಗ್ಗೆ ಭಿನ್ನಾಭಿ ಪ್ರಾಯಗಳೂ ಉಂಟು.

ಕಲ್ಯಾಣದ ಚಾಲುಕ್ಯರಲ್ಲಿ ಕ್ರಿ. ಶ. ೧೨ನೇ ಶತ ಮಾನದ ಮೂರು ಮತ್ತು ನಾಲ್ಕನೇ ದಶಕಗಳಲ್ಲಿ ಆಳಿದ ಮೂರನೇ ಸೋಮೇಶ್ವರನು ವಿದ್ವಾಂಸನೂ ಹೌದು, ಗ್ರಂಥಕರ್ತನೂ ಹೌದು. ಇವನು ರಚಿಸಿದ ಮಾನಸೋ ಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿ ಬರೋಡಾ ದಿಂದ ಮೂರು ಸಂಪುಟಗಳಲ್ಲಿ ಪ್ರಕಟಗೊಂಡಿದೆ.[7] ಮೈಸೂರಿನ ಓರಿಯಂಟಲ್ ಲೈಬ್ರರಿಯಿಂದ ಭಾಗಶಃ ಪ್ರಕಟವಾಗಿದೆ. ಸಮಕಾಲೀನ ರಾಜ್ಯಾಡಳಿತಕ್ಕೆ ಸಂಬಂಧಿಸಿದ ಕೆಲವು ವಿವರಗಳು ಈ ಗ್ರಂಥದಲ್ಲಿದ್ದು, ಈ ದಿಸೆಯಲ್ಲಿ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ. ಈ ಗ್ರಂಥದ ಪ್ರಕಟಣೆಯಲ್ಲಿ ನೆರವಾದ ಹಸ್ತಪ್ರತಿಗಳು ಪೂನಾ, ಬಿಕನೀರ್, ಬರೋಡಾ, ಮೈಸೂರು ಮುಂತಾ ದೆಡೆಯಲ್ಲಿ ದೊರೆತಿದ್ದು, ಇದು ಗ್ರಂಥದ ಜನಪ್ರಿಯತೆ ಹಾಗೂ ಸಾರ್ವತ್ರಿಕ ಮನ್ನಣೆಯ ದ್ಯೋತಕವೆನಿಸಿದೆ. ಗುಜರಾತಿನ ಹಾಗೂ ಕರ್ನಾಟಕದ ದೇವಾಲಯಗಳನ್ನು ಗುರುತಿಸಲು ಸಹಾಯಕವಾಗಿರುವ ಅಪರಾಜಿತಪೃಚ್ಛಾ ಹಾಗೂ ಸಮರಾಂಗಣ ಸೂತ್ರಧಾರ ಗ್ರಂಥಗಳು ಬರೋಡಾದಿಂದ ಪ್ರಕಟಗೊಂಡಿವೆ.[8] ಅಪರಾಜಿತ ಪೃಚ್ಛಾ ಗ್ರಂಥ ಸಂಪಾದನಕಾರರ ಪ್ರಕಾರ, ಈ ವಾಸ್ತು ಗ್ರಂಥವು ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ಕ್ರೋಢೀ ಕರಿಸಲ್ಪಟ್ಟಿದ್ದು,[9] ಈ ಕಾಲದ ನಿಷ್ಕರ್ಷೆಯ ಬಗ್ಗೆ ಭಿನ್ನಾ ಭಿಪ್ರಾಯಗಳುಂಟು. ಈ ಗ್ರಂಥದಲ್ಲಿ ವಾಸ್ತು ವಿವರಣೆ ಗಳೇ ಅಲ್ಲದೆ ಕ್ವಚಿತ್ತಾಗಿ ಆಡಳಿತ ಹಾಗೂ ಅಧಿಕಾರದ ಪದನಾಮಗಳು ಗುರುತಿಸಲ್ಪಟ್ಟಿವೆ. ಈ ಗ್ರಂಥದ ಉಲ್ಲೇಖಗಳೊಂದಿಗೆ ಸಮಕಾಲೀನ ಕನ್ನಡ ಶಾಸನಗಳ ಲ್ಲಿಯೂ ಹಲವಾರು ಅಧಿಕಾರಸೂಚಕ ಪದನಾಮಗಳು ಪ್ರಾಪ್ತವಾಗಿವೆ. ಈ ರೀತಿ ಲಭ್ಯವಿರುವ ಶಾಸನ ಹಾಗೂ ಗ್ರಂಥ ವಿವರಗಳನ್ನು ಪರಸ್ಪರ ತಾಳೆ ನೋಡಲು ಸಾಧ್ಯವಿದೆ. ಒಬ್ಬನೇ ಅಧಿಕಾರಿ ಹಲವಾರು ಕಾರ್ಯ ಗಳನ್ನು ನಿರ್ವಹಿಸುತ್ತಿದ್ದ ಬಗ್ಗೆ ಶಾಸನಾಧಾರವಿದೆ. ಈಗ ದೊರೆತಿರುವ ವಿವರಗಳಿಂದ ಅಧಿಕಾರವ್ಯಾಪ್ತಿ ಯನ್ನು ಕರಾರುವಾಕ್ಕಾಗಿ ಗುರುತಿಸಲಾಗಿಲ್ಲವೆನ್ನುವುದು ನಿಜ. ಶಾಸನ ಹಾಗೂ ಗ್ರಾಂಥಿಕ ವಿವರಣೆಯಲ್ಲಿ ಕಂಡುಬರುವ ವ್ಯವಸ್ಥೆ ಗ್ರಂಥಪೂರ್ವ ಹಾಗೂ ಗ್ರಂಥೋ ತ್ತರ ಕಾಲದಲ್ಲಿ ಬಳಕೆಯಲ್ಲಿದ್ದು, ಕರ್ನಾಟಕ ಹಾಗೂ ಲಾಟ ಪ್ರದೇಶದಲ್ಲಿ ಪ್ರಚಲಿತದಲ್ಲಿತ್ತು ಎನ್ನಬಹುದು.

ಚಾಲುಕ್ಯರ ನಾಡಿನಲ್ಲಿದ್ದ ವ್ಯವಸ್ಥೆ ಹೊಯ್ಸಳರ ಕಾಲದಲ್ಲಿಯೂ ಮುಂದುವರೆದಿದ್ದು, ಪ್ರಸ್ತುತ ಲೇಖನ ದಲ್ಲಿ ಗ್ರಂಥ ಹಾಗೂ ಶಾಸನವಿವರಗಳನ್ನು ಬಳಸಿ ಹೊಯ್ಸಳರ ಕಾಲದ ಅಧಿಕಾರ ಹಾಗೂ ಪದನಾಮ ಗಳನ್ನು ವ್ಯವಸ್ಥಿತವಾಗಿ ಗುರುತಿಸಲು ಯತ್ನಿಸಲಾಗಿದೆ.

ಸಭಾಮಧ್ಯೇ ಸಮಾಖ್ಯಾತಾಃ ಸ್ಥಿತಃ ಸಿಂಹಾಸನೇ
ತಥಾ
ಸರ್ವಾವಸರಕಂ ತತ್ರ ಪ್ರವೃತ್ತಂ ಜನಸಂಕುಲಂ
ದ್ವಾದಶ ದಂಡನಾಯಕಾ ಪ್ರತೀಹಾರ ದ್ವಯೀ
ತಥಾ
ಅಮಾತ್ಯ ರಾಜಕರಣಾ ಶ್ರೀಕರಣಾ
ವಯಸ್ಕರಾಃ[10]

---

6 ಅದೇ

7 ಶ್ರೀಗೊಂಡೇಕರ್ (ಸಂ.) : ಮಾನಸೋಲ್ಲಾಸ, ಬರೋಡಾ, ಸಂಪುಟ ೧, ೧೯೨೫ ; ಸಂಪುಟ ೨, ೧೯೩೯ ; ಸಂಪುಟ ೩ (?)

8 ಪಿ. ಎ. ಮಂಕಡ್ (ಸಂ.) : ಅಪರಾಜಿತಪೃಚ್ಛಾ, ಬರೋಡಾ, ೧೯೫೦ ; ವಿ. ಎಸ್. ಅಗರ್‌ವಾಲಾ (ಸಂ.) : ಸಮ ರಾಂಗಣ ಸೂತ್ರಧಾರ, ಬರೋಡಾ, ೧೯೬೬

9 ಅಪರಾಜಿತಪೃಚ್ಛಾ, ಪು. ೧೨

10 ಅದೇ, ಅಧ್ಯಾಯ ೭೮, ಶ್ಲೋಕ ೩೧-೩೨, ಪು. ೧೯೬

ರಾಜನ ಆಸ್ಥಾನವನ್ನು ಗ್ರಂಥಕಾರನು ಗುರುತಿಸಿದ್ದು, ಸಭೆಯ ಮಧ್ಯೆ ವಿರಾಜಮಾನನಾದ ರಾಜನನ್ನೂ ಅವನೊಡನಿರುವ ಸಭಾಸದರನ್ನೂ ಗುರುತಿಸಿದ್ದಾನೆ. ರಾಜ್ಯದ ಆಡಳಿತ ಹಾಗೂ ರಕ್ಷಣೆಯ ಕಾರ್ಯವನ್ನು ನಿರ್ವಹಿಸುತ್ತಿದ್ದ ದಂಡನಾಯಕರಿಗೆ ಆಸ್ಥಾನದಲ್ಲಿ ಅಗ್ರ ಮರ್ಯಾದೆಯು ಸಲ್ಲುತ್ತಿತ್ತು. ಅಪರಾಜಿತಪೃಚ್ಛಾ ಗ್ರಂಥಕಾರನ ಪ್ರಕಾರ ಹನ್ನೆರಡುಜನ ದಂಡನಾಯಕರಿಗೆ ಸ್ಥಾನಮಾನಗಳು ಪ್ರಾಪ್ತವಾಗಿದ್ದವು. ತದನಂತರ ಪ್ರತೀಹಾರರಿಗೆ, ಅಮಾತ್ಯರಿಗೆ ವೃತ್ತಿಗೌರವವು ಸಲ್ಲುತ್ತಿತ್ತು. ಪ್ರತೀಹಾರರು ಬಹುಶಃ ರಾಜನ ಅಂಗರಕ್ಷಣೆಯ ಕಾರ್ಯವನ್ನೂ ನಿರ್ವಹಿಸುತ್ತಿದ್ದರು. ಇವರು ರಾಜನ ಅತ್ಯಂತ ಸಮೀಪವರ್ತಿಗಳಾಗಿರಲು ಸಾಧ್ಯವಿದೆ. ಮಾನಸೋಲ್ಲಾಸ ಗ್ರಂಥದಲ್ಲಿ ಪ್ರತೀಹಾರರು ಸಭೆಯಲ್ಲಿ ನಿರ್ವಹಿಸುತ್ತಿದ್ದ ಕಾರ್ಯದ ಕ್ವಚಿತ್ ಸೂಚನೆಯಿದೆ :[11]

ನಾನಾದೇಶಾಧಿಪಾನ್ ಭೂಪಾನ್ ಸ್ವಾತ್ಮ
ರಕ್ಷಾರ್ಥಂ ಆಗತಾನ್
ಪ್ರವೇಶಯ ಪ್ರತಿಹಾರೇತ್ ಆದಿಶೇತ್
ಪೃಥವೀಪತಿಃ॥
ಪ್ರವೇಶಿತಾನ್‌ಪ್ರತೀಹಾರ್ಯೈಃ ಪ್ರಣತಾನ್ ದಂಡವ
ದ್ಭುವಿಃ
ಸಪ್ರಸಾದಮಿತಿ ಬ್ರೂಯಾದಾಶಿಷ್ಮತ
ನಿವೇದತ॥

ಚಕ್ರವರ್ತಿಯ ಆದೇಶದ ಮೇರೆಗೆ, ಆಶ್ರಯವನ್ನರಸಿ ಬಂದ ರಾಜರು ಪ್ರತೀಹಾರರೊಂದಿಗೆ ಆಸ್ಥಾನವನ್ನು ಪ್ರವೇಶಿಸುತ್ತಿದ್ದರು. ರಾಜರುಗಳು ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸಿದನಂತರ ಚಕ್ರವರ್ತಿಯು, ಅವರಿಗೆ ಅಭಯಹಸ್ತ ನೀಡಿ ಉಚಿತಾಸನದೊಂದಿಗೆ ಸತ್ಕರಿಸುತ್ತಿದ್ದನು. ಬಹುಶಃ ಈ ಅಧೀನ ರಾಜರ ಪೂರ್ವಾಪರಗಳನ್ನು ತಿಳಿಯುವ, ವ್ಯವಹರಿಸುವ ಕಾರ್ಯಕ್ಕೆ ಪ್ರತೀಹಾರರು ನೇಮಿಸಲ್ಪಡುತ್ತಿದ್ದರು. ಇವರನ್ನು ಸಾಮಾನ್ಯವಾಗಿ ದ್ವಾರಪಾಲಕರೆಂದು ಗುರುತಿಸುವುದುಂಟು.

ಅಪರಾಜಿತಪೃಚ್ಛಾ ಗ್ರಂಥದ ಪ್ರಕಾರ[12] ಪ್ರಾಸಾದ ಗೃಹಗಳನ್ನು ನಿರ್ಮಿಸುವಲ್ಲಿ ಅಧಿಕಾರಕ್ಕೆ ತಕ್ಕಂತೆ ಅವುಗಳ ಮಾನವೂ ನಿಶ್ಚಯಿಸಲ್ಪಡುತ್ತಿತ್ತು. ಮಂತ್ರಿಯ ನಂತರ ದ್ವಾರಪಾಲಕನನ್ನು ಹೆಸರಿಸುವುದರಿಂದ ಇವನು ಕೇವಲ ದ್ವಾರಪಾಲಕನಾಗಿರದೆ ಗುರುತರಕಾರ್ಯವನ್ನೂ ನಿರ್ವಹಿಸುತ್ತಿದ್ದನೆಂದು ತಿಳಿಯಬಹುದು:

ರಾಜಾಲಯೇ ಚ ಯನ್ಮಾನಂ ತದರ್ಧಂ ದಂಡ
ನಾಯಕೇ
ತದರ್ಧಂ ಮಂತ್ರಿ ಸಂಸ್ಥಾನಂ ಮಂತ್ರ್ಯರ್ಧಂ
ದ್ವಾರಪಾಲಕೇ

ಈ ಶ್ಲೋಕದ ಪೂರ್ಣವಿವರವು ವಾಸ್ತುವಿಗೆ ಸಂಬಂಧಿಸಿದೆ. ದಂಡನಾಯಕ ಹಾಗೂ ಮಂತ್ರಿಪದವಿಗಳನ್ನು ಒಬ್ಬರೇ ನಿರ್ವಹಿಸಿದ ಉದಾಹರಣೆಗಳಿವೆ. "ಜಗತ್ಪಸುತ್ಯಾಕೃತಿ ಮಂತ್ರಿ ಮಂಡಳಿಕ ದಂಡಾದೀಶ"[13] ಎಂಬ ಶಾಸನದ ಒಕ್ಕಣೆ ಮಂತ್ರಿ, ಮಂಡಳಿಕ ಹಾಗೂ ದಂಡಾದೀಶನೆನಿಸಿದ ವ್ಯಕ್ತಿಯೊಬ್ಬನನ್ನು ಗುರುತಿಸುತ್ತದೆ.

ದಂಡನಾಯಕ– ದಂಡಾದೀಶ–ದಂಡಾಧಿಪ–ದಂಡನಾಥರೆಂದೂ ಆಡುಭಾಷೆಯಲ್ಲಿ ದಣ್ಣಾಯಕರೆಂದೂ ಈ ಎಲ್ಲಾ ಪ್ರಯೋಗಗಳು ಶಾಸನಗಳಲ್ಲಿ ಬಳಸಲ್ಪಟ್ಟಿವೆ. 'ದಂಡನಾಯಕತಿ ಸಾತವ್ವೆ'[14] ಎನ್ನುವಲ್ಲಿ ಕೇವಲ ದಂಡನಾಯಕನ ಹೆಂಡತಿಯೇ ? ಅಥವಾ ಹೆಣ್ಣೂ ಈ ಪದವಿಗೆ ಅರ್ಹಳೇ ? ಅಧಿಕಾರ ನಿರ್ವಹಿಸಿದ್ದಕ್ಕೆ ಮತ್ತಷ್ಟು ಪ್ರಮಾಣಗಳು ಅಗತ್ಯವಿದೆ.

ರಾಜಕಾರಣ ಹಾಗೂ ಶ್ರೀಕರಣ ಎರಡೂ ಅಮಾತ್ಯರು ನಿರ್ವಹಿಸುತ್ತಿದ್ದ ಅಧಿಕಾರಸೂಚಕ

11 ಸಂಪುಟ ೨, ಅಧ್ಯಾಯ ೧೧, ಶ್ಲೋಕ ೩೪-೩೫, ಪು. ೧೦೬
12 ಅಧ್ಯಾಯ ೮೧, ಶ್ಲೋಕ ೧೪, ಪು. ೨೦೩
13 ಎಪಿಗ್ರಾಫಿಯಾ ಕರ್ನಾಟಿಕ, ಹಾಸನ ಜಿಲ್ಲೆ, ಸಂಪುಟ ೫, ಭಾಗ ೨, ೧೯೦೨ : ಚನ್ನರಾಯಪಟ್ಟಣ ೧೭೯
14 ಅದೇ, ಚನ್ನರಾಯಪಟ್ಟಣ ೧೬೧

ಪದಗಳು. "ರಾಜ್ಯಕರಣಾಗ್ರಣಿಯಂ ವಿಭುಮಂತ್ರಿ ರಾಮನಂ"[15] ಎಂದು ಅರಕಲಗೂಡಿನ ಶಾಸನವೊಂದು ರಾಜ್ಯಕರಣಕ್ಕೆ ನೇಮಿಸಲ್ಪಟ್ಟ ಮಂತ್ರಿಯನ್ನು ಹೆಸರಿಸಿದೆ.'ರಾಜಕಾರಣ' ಹಾಗೂ 'ರಾಜ್ಯಕರಣ'ಈ ಪದಗಳು ರಾಜಕಾರಣಿ ಪದಕ್ಕೆ ನಾಂದಿಯಾಯಿತೇ ? ಆದರೆ, ಅಂದಿನ ರಾಜಕಾರಣದಿಂದ ಉದಯಿಸಿದ 'ರಾಜಕಾರಣಿ' ಎನ್ನುವ ಪದ ಇಂದು ಅಪಮೌಲ್ಯಗೊಂಡು ಬಳಕೆಯಲ್ಲಿದೆ. ಶ್ರೀಕರಣದ ಅಧಿಕಾರದ ವ್ಯಾಪ್ತಿ ಎಲ್ಲಿಯೂ ಸ್ಪಷ್ಟವಾಗಿಲ್ಲ. ಬಹುಶಃ ಇಂದಿನ ಮುಖ್ಯಮಂತ್ರಿಗೆ ಸಮನಾದುದು. ಈ ಹುದ್ದೆಗೆ ಅಮಾತ್ಯರಲ್ಲಿ ಹಿರಿಯರೊಬ್ಬರು ನೇಮಿಸಲ್ಪಡುತ್ತಿದ್ದರು.

"ಶ್ರೀ ಮನ್ಮಹಾಪ್ರಧಾನಂ ಸರ್ವಾಧಿಕಾರಿ ಶ್ರೀಕರಣಾಗ್ರಗಣ್ಯಂ ಸರ್ವಾಧ್ಯಕ್ಷನೆನಿಸಿದ"[16] ಹಾಗೂ "ಶ್ರೀಮನ್‌ಮಹಾಪ್ರಧಾನಂ ಶ್ರೀಕರಣಾಧಿಪತಿ ಹಿರಿಯ ದಂಡನಾಯಕ ಮಾಚೈಯ"[17] ಈ ಶಾಸನೋಕ್ತಿಗಳು ಶ್ರೀಕರಣಾಧಿಕಾರಕ್ಕೆ ನೇಮಿಸಲ್ಪಟ್ಟ ಮಂತ್ರಿಗಳನ್ನು ಗುರುತಿಸಿವೆ. "ಶ್ರೀಕರಣದ ಹೆಗ್ಗಡೆ ಎರೆಯಣ್ಣ,"[18] "ಶ್ರೀಕರಣ ತಂತ್ರಾಧಿಕಾರಿ,"[19] "ತಂತ್ರಶ್ರೀಕರಣಾಧಿಕಾರನಿರತಂ"[20] ಎಂದೂ ಶಾಸನಗಳು ಬಳಸಿವೆ. "ತನ್ನ ಶ್ರೀಕರಣಾಧಿಸರ್ವ್ವಾಧಿಕಾರಿ ಸರ್ವ್ವಾಧ್ಯಕ್ಷತಾದಕ್ಷ" ಎಂಬ ಒಕ್ಕಣೆ ಹಲವು ವ್ಯವಸ್ಥೆಗಳ ಮೇಲೆ ಹಿಡಿತವುಳ್ಳ ಸರ್ವಾಧಿಕಾರವನ್ನು ಸೂಚಿಸಿದೆ. ಅಮಾತ್ಯರ ಸಂಖ್ಯೆಯನ್ನು ಸ್ಪಷ್ಟವಾಗಿ ಸೂಚಿಸಿಲ್ಲವಾದರೂ "ಚತುರ್ವಿಧ ಪ್ರಣೀತ ನೀತಿಚಾಣಾಕ್ಯ ತಂತ್ರಾಧಿಕಾರಿ"[21] ಎಂಬ ಉಲ್ಲೇಖವು ನಾಲ್ಕು ಜನರಿಗೆ ಅವಕಾಶವೆನಿಸುವಂತಿದೆ. ಈ ದಿಸೆಯಲ್ಲಿ ಮತ್ತಷ್ಟು ಸಾಕ್ಷ್ಯಾಧಾರಗಳು ಅಗತ್ಯ. ಬನವಸೆ ನಾಡನ್ನಾಳುತ್ತಿದ್ದ ಬಿಜ್ಜಳನ ಮಹಾಪ್ರಧಾನ ಕೇಶಿಮಯ್ಯನಿಗೆ ಮೂವರು ಪ್ರಧಾನರಿದ್ದು, ಒಟ್ಟು ನಾಲ್ಕು ಜನ ಪ್ರಧಾನರೆಂದು ಗುರುತಿಸಬಹುದು.[22]

ಸರ್ವಂ ಶ್ರೀಕರಣಾದ್ಯಂ ರಾಜಾಧಿಕರಣಂ ತಥಾ
ವ್ಯಯಾಧಿಕರಣಂ, ಚೈವ ಧರ್ಮಾಧಿಕರಣಂ ತಥಾ

ಅಪರಾಜಿತಪೃಚ್ಛಾ ಗ್ರಂಥೋಕ್ತಿಯ ಪ್ರಕಾರ ಶ್ರೀಕರಣ, ರಾಜಾಧಿಕರಣ, ವ್ಯಯಾಧಿಕರಣ, ಧರ್ಮಾಧಿಕರಣ ವ್ಯವಸ್ಥೆಯ ನಾಲ್ಕು ಅಂಗಗಳು.[23] ರಾಜಾಧಿಕರಣವು ರಾಜ್ಯವ್ಯವಸ್ಥೆಯನ್ನೂ ವ್ಯಯಾಧಿಕರಣವು ದೇಶದ ಆಯವ್ಯಯ ಮತ್ತು ಹಣಕಾಸು ವ್ಯವಸ್ಥೆಯನ್ನೂ ಧರ್ಮಾಧಿಕರಣವು ನ್ಯಾಯಾಂಗ ವ್ಯವಸ್ಥೆಯನ್ನೂ ಶ್ರೀಕರಣವು ಇನ್ನಿತರ ವ್ಯವಸ್ಥೆಗಳನ್ನೊಳಗೊಂಡಂತೆ ಸರ್ವಾಧಿಕಾರವನ್ನೂ ನಿರ್ವಹಿಸುತ್ತಿತ್ತು ಎಂದು ಗುರುತಿಸಬಹುದು. ಈ ವಿಭಾಗಗಳಿಗೆ ಪ್ರತ್ಯೇಕ ಮಂತ್ರಿಗಳು ನೇಮಿಸಲ್ಪಡುತ್ತಿದ್ದರು. ಈ 'ಕರಣ'ಗಳ ಅಥವಾ 'ಅಧಿಕರಣ'ಗಳ ಕಛೇರಿವ್ಯವಹಾರಗಳನ್ನು ನೋಡಿಕೊಳ್ಳುವವನನ್ನು 'ಕರಣಿಕ' ಎನ್ನಲು ಸಾಧ್ಯವಿದೆ. ಆಸ್ಥಾನದಲ್ಲಿ ಉಪಸ್ಥಿತರಾದ ಸಭಾಸದರನ್ನು ಗುರುತಿಸುವಾಗ ಮಾನಸೋಲ್ಲಾಸ ಗ್ರಂಥಕಾರನು, ಅಮಾತ್ಯ ಮಂತ್ರಿ ಸಚಿವರೆಂದು ಒಟ್ಟಿಗೆ ಉಲ್ಲೇಖಿಸುತ್ತಾನೆ. ಇವು ಪರ್ಯಾಯ ಪದಗಳೆಂದೇ ಬಳಕೆಯಲ್ಲಿವೆ. ಆದರೆ ಒಟ್ಟಿಗೆ ಬಳಸಿರುವ ಔಚಿತ್ಯವೇನೋ ತಿಳಿಯದು. ತದನಂತರ, ಮಂಡಲೇಶ್ವರರು, ಸಾಮಂತರು ಹಾಗೂ ಅಮಾತ್ಯರುಗಳಿಗೆ ಉಚಿತಾಸನಗಳನ್ನು ಕಲ್ಪಿಸಿದ್ದಾನೆ.

---

15 ಅದೇ, ಅರಕಲಗೂಡು ೫
16 ಅದೇ, ಬೇಲೂರು ೧೭೫
17 ಅದೇ, ಚನ್ನರಾಯಪಟ್ಟಣ ೧೬೦
18 ಅದೇ, ಅರಸೀಕೆರೆ ೧೩೮
19 ಅದೇ, ಹಾಸನ ೭೦
20 ಅದೇ, ಹಾಸನ ೭೬
21 ಅದೇ
22 ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೩೦
23 ಅಧ್ಯಾಯ ೮೪, ಶ್ಲೋಕ ೮, ಪು. ೨೦೦

ಅಮಾತ್ಯಮಂತ್ರಿಸಚಿವಾ ದ್ವಿತೀಯಾಂಗಾ
ನಿಯೋಜಿತಾಃ
ನಿವೇಶೇಯುರ್ಯಥಾ ಸ್ಥಾನಂ ನೃಪದಿಷ್ಟಾಸನೇ
ಕ್ರಮಾತ್
ಮಂಡಲಾಧೀಶ್ವರಾಃ ಶೂರಾಃ ಸಾಮಂತಾ
ಮಾತ್ಯಕಾಃ ಅಪಿ
ವಾಮದಕ್ಷಿಣಪಂಕ್ತಿಸ್ಥಃ ಪುರೋಭಾಗೇ ಮಹೀ
ಭುಜಃ

ಅಪರಾಜಿತಪೃಚ್ಛಾ ಗ್ರಂಥದಲ್ಲಿ ನಾಲ್ಕು ಅಧಿಕರಣಗಳನ್ನು ಮಾತ್ರ ಗುರುತಿಸಿದ್ದು, ಮಾನಸೋಲ್ಲಾಸ ಗ್ರಂಥದಲ್ಲಿ ಹಲವಾರು ವಿಭಾಗವ್ಯವಸ್ಥೆಗಳನ್ನೂ ನಿರ್ವಹಿಸುವ ಅಧಿಕಾರಿಗಳ ಸರಣಿಯಿದೆ. ಇವರೆಲ್ಲರೂ ಸಭಾಸದರೆಂದೇ ಉಲ್ಲೇಖಿಸಲ್ಪಟ್ಟಿದ್ದಾರೆ.[24]

ಸಂವಿಶೇಯುರ್ಯಥಾ ಸ್ಥಾನಮಾಸನೇಷು
ನೃಪಾಜ್ಞಯಾ
ದೇಶಾಧಿಕಾರಿಣಃ ಕೇಚಿತ್ಕೇ ಚಿದ್ಗ್ರಾಮಾಧಿಕಾರಿಣಃ
ಧರ್ಮಾಧಿಕಾರಿಣಃ ಕೇಚಿದರ್ಥಾಧಿಕಾರಿಣಃ
ಕಾಮಾಧಿಕಾರಿಣಃ ಕೇಚಿತ್ಕೋಶಾಧಿಕಾರಿಣಃ[25]

ಈ ಅಧಿಕಾರಿಗಳ ಯಾದಿಯಲ್ಲಿ ಕೆಲವು ಪುನರಾವರ್ತನೆಗೊಂಡಿವೆ. ಕೆಲವು ಅಧಿಕಾರಗಳು ಅಸ್ಪಷ್ಟವೆನಿಸುತ್ತವೆ. ಉದಾಹರಣೆಗಳು ಇಲ್ಲಿವೆ :

ಗ್ರಾಮಾಧಿಕಾರಿ, ಧರ್ಮಾಧಿಕಾರಿ, ಅರ್ಥಾಧಿಕಾರಿ
ಕೋಶಾಧಿಕಾರಿ, ನಿಷ್ಕಾಧಿಕಾರಿ, ತುಲಾಧಿಕಾರಿ
ಮುದ್ರಾಧಿಕಾರಿ, ಮೌಲ್ಯಾಧಿಕಾರಿ, ನಾವಾಧಿಕಾರಿ
ಮಾರ್ಗಾಧಿಕಾರಿ, ದ್ವಾರಾಧಿಕಾರಿ, ದ್ವೀಪಾಧಿಕಾರಿ
ಯೋಧಾಧಿಕಾರಿ, ಶಸ್ತ್ರಾಧಿಕಾರಿ, ದಾನಾಧಿಕಾರಿ
ದಂಡಾಧಿಕಾರಿ, ಗಜಾಧಿಕಾರಿ, ಅಶ್ವಾಧಿಕಾರಿ
ಶಸ್ತ್ರಾಧಿಕಾರಿ, ವಾದ್ಯಾಧಿಕಾರಿ, ಗೇಯಾಧಿಕಾರಿ
ನೃತ್ಯಾಧಿಕಾರಿ. ಚಿತ್ರಾಧಿಕಾರಿ ಇತ್ಯಾದಿ[26]

ಅಸ್ಪಷ್ಟವೆನಿಸುವ ಅಧಿಕಾರಿಗಳು :

ಕಾಮಾಧಿಕಾರಿ, ಭೂಷಾಧಿಕಾರಿ, ಸುಧಾಧಿಕಾರಿ
ಕಾಂತಾಧಿಕಾರಿ, ವರ್ಣಾಧಿಕಾರಿ ಇತ್ಯಾದಿ.

ಈ ಅಧಿಕಾರಗಳಿಗೆ ಸಂಬಂಧಿಸಿದಂತೆ ಹೆಗ್ಗಡೆಗಳು ಕಾರ್ಯನಿರ್ವಹಿಸಿದ್ದನ್ನು 'ಅರಸಿಕೆರೆಯು ರಾಜಾಧ್ಯಕ್ಷದ ಹೆಗ್ಗಡೆ'[27] ಎಂಬ ಶಾಸನೋಲ್ಲೇಖದಿಂದ ಗಮನಿಸಬಹುದು. ಮಂತ್ರಿಗಳ ನಂತರ ಪ್ರದೇಶವೊಂದರಲ್ಲಿ ಹೆಗ್ಗಡೆಗಳು ಬಹುಶಃ ಕಾರ್ಯನಿರ್ವಹಿಸುತ್ತಿದ್ದರು. 'ಶ್ರೀಕರಣದ ಹೆಗ್ಗಡೆ ಎರೆಯಣ್ಣ'[28] 'ಅಶ್ವಾಧ್ಯಕ್ಷದ ಹೆಗ್ಗಡೆ'[29] 'ಕೋಶಾಧ್ಯಕ್ಷ ಪದವಿ'[30] ಮುಂತಾದ ಶಾಸನೋಕ್ತಿಗಳಿಂದ ಅಧ್ಯಕ್ಷ ಹಾಗೂ ಹೆಗ್ಗಡೆ ಸಮಾನ ಪದವೀಸೂಚಕಗಳೆನ್ನಬಹುದು. ಹೆಗ್ಗಡೆ, ಪೆರ್ಗಡೆ ಸಂಸ್ಕೃತದ ಮಹತ್ತರ ಪದದ ಕನ್ನಡಾನುವಾದವಾಗಿರಲು ಸಾಧ್ಯವೆಂದು ಡಾ॥ ಚಿದಾನಂದಮೂರ್ತಿಯವರು ಊಹಿಸುತ್ತಾರೆ.[31] ಪಂಪನ ಆದಿಪುರಾಣದಲ್ಲಿ ಮಹತ್ತರನನ್ನು ಗುರುತಿಸಿದ್ದು, ಮಹತ್ತರನ ವಿಶೇಷಣಗಳನ್ನು ಗಮನಿಸಬಹುದು. ಹೆಗ್ಗಡೆಗಳ ಅಧಿಕಾರ ವ್ಯಾಪ್ತಿ ದೇಶದೊಳಗೇ ಹೊರತು ವಿದೇಶಗಳಿಗೆ ವಿಸ್ತರಿಸಿಲ್ಲ. ಆದಿಪುರಾಣವು ಮಹತ್ತರನನ್ನು 'ಜಾನಪದನುಂ ಪ್ರತ್ಯುತ್ಪನ್ನ ಪ್ರತಿಭನುಂ ವಕ್ರೋಕ್ತಿನಿಪುಣನುಂ ಪರಿಚಿತಾಶೇಷ ಭಾಷನುಂ ವಯೋವೃದ್ಧನುಂ ಪ್ರಸಿದ್ಧನುಮಪ್ಪ ಮಹತ್ತರನಂ' ಎಂದು ಬಣ್ಣಿಸಿದೆ.

ಕೆ. ಪಿ. ಜಯಸ್ವಾಲ್‌ರವರು 'ಗ್ರಾಮ ಘೋಷ ಮಹತ್ತರಾಃ' ಎಂದು ಉಲ್ಲೇಖಿಸಿದ್ದು, Presidents of townships and villages ಎಂದು

24 ಸಂ. ೨, ಶ್ಲೋಕ ೫-೬, ಪು. ೧೦೪
25 ಅದೇ, ಶ್ಲೋಕ ೭-೮
26 ಅದೇ, ಶ್ಲೋಕ ೭-೧೩, ಪು. ೧೦೪-೧೦೫
27 ಎ.ಕ., ಅರಸೀಕೆರೆ ೬೯
28 ಅದೇ, ಅರಸೀಕೆರೆ ೧೩೮
29 ಅದೇ, ಚನ್ನರಾಯಪಟ್ಟಣ ೧೫೧
30 ಅದೇ, ಚನ್ನರಾಯಪಟ್ಟಣ ೨೦೩
31 ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೩೧

ಅರ್ಥೈಸುತ್ತಾರೆ.[32] ಗ್ರಾಮ, ಶ್ರೇಣಿ, ಕುಶಲಕರ್ಮಿಗಳ ಅಥವಾ ವರ್ತಕಸಂಘದ ಅಧ್ಯಕ್ಷ, ಹಿರಿಯ ಎಂದು ಗಮನಿಸಬೇಕು. ಸಮರಾಂಗಣ ಸೂತ್ರಧಾರ ಗ್ರಂಥವು "ಶ್ರೇಷ್ಠಿನೋ ದಕ್ಷಿಣಾಶಾಯಾಂ ತಥಾ ದೇಶಮಹತ್ತರಾನ್"[33] ಎಂದು ಗುರುತಿಸಿದೆ. ಈತ ನಾಡಿನ ಹಿರಿಯ ಮುತ್ಸದ್ದಿಯೂ ಹೌದು. ದೇಶದ ರಾಯಭಾರ ವಹಿಸಿ ದೇಶವಿದೇಶಗಳಿಗೆ ಹೋಗಿಬರುತ್ತಿದ್ದನು. ನಿಯೋಗಿಗಳನ್ನು ಮಹತ್ತರರೆಂದು ಕರೆದಿರುವುದನ್ನು ಡಾ॥ ಚಿದಾನಂದಮೂರ್ತಿಯವರೆ ಗುರುತಿಸುತ್ತಾರೆ.[34]

ದಂಡನಾಯಕ ಹಾಗೂ ಸೇನಾಪತಿ ಎರಡೂ ಪ್ರಯೋಗಗಳು ವ್ಯಕ್ತವಾಗಿದ್ದು, ಸಮಾನ ಹಾಗೂ ಪರ್ಯಾಯ ಪದಗಳೆನಿಸಿದರೂ ದಂಡನಾಯಕರಿಗೆ ಸೇನೆಯ ಆಡಳಿತದೊಂದಿಗೆ ಇತರ ಆಡಳಿತವೂ ಒಳಪಟ್ಟಿತ್ತು ಎಂದು ಗಮನಿಸಬಹುದು. ದಂಡನಾಯಕರ ನಂತರ ಮಹಾಪಸಾಯಿತರೂ ಪಸಾಯಿತರೂ ಕೆಳಗಿನ ಅಧಿಕಾರಿಗಳೆಂದು ತಿಳಿಯಬಹುದು. 'ಸಮಸ್ತ ದಳಪಸಾಯಿತ'[35] 'ಮಹಾಪಸಾಯ್ತ'[36] ಎಂಬ ಪ್ರಯೋಗಗಳು ಬಹುಶಃ ಸಮಾನ ವೃತ್ತಿಸೂಚಕ ಪದಗಳಿರಬಹುದು. ರಕ್ಷಣಾ ಕಾರ್ಯಕ್ಕೆ ಅಥವಾ ಸೇನೆಗೆ ನೇರವಾಗಿ ಸಂಬಂಧವಿರದ ವೃತ್ತಿಯಾಗಿ 'ಅಸ್ವಾಧ್ಯಕ್ಷದ ಹೆಗ್ಗಡೆ' ಹಾಗೂ ಮೇಲೆ ಗುರುತಿಸಿದ ಅಶ್ವಾಧಿಕಾರಿ, ಗಜಾಧಿಕಾರಿಗಳನ್ನು ಹೆಸರಿಸಬಹುದು.

ಮಂಡಲೇಶ್ವರರು, ಮಂಡಳಿಕರು, ಮಹಾಸಾಮಂತರು, ಸಾಮಂತರು ರಾಜ ಅಥವಾ ಚಕ್ರವರ್ತಿಗಳ ಅಧೀನದಲ್ಲಿದ್ದು ಕಪ್ಪಕಾಣಿಕೆಗಳನ್ನು ನೀಡುತ್ತಾ ಆಶ್ರಯಿಸಿದವರು. ತಮ್ಮ ತಮ್ಮ ದೇಶಪ್ರಾಂತ್ಯಗಳಲ್ಲಿ ಇವರು ತಕ್ಕಮಟ್ಟಿಗೆ ಸ್ವತಂತ್ರರೂ ಹೌದು. ಕೆಲವರು ರಾಜ ಅಥವಾ ಚಕ್ರವರ್ತಿಯ ಸಮೀಪದಲ್ಲಿದ್ದು ಅಧಿಕಾರ ನಿರ್ವಹಣೆಯನ್ನು ಒಪ್ಪಿಕೊಂಡಿರುವುದುಂಟು.

ಚತ್ವಾರೋ ಮಂಡಲೇಶಾಶ್ಚ ಮಂಡಲಿಕಾ
ದ್ವಾದಶಾ
ಮಹಾಸಾಮಂತ ದ್ವಿರಷ್ಟ ಸಾಮಂತಾಶ್ಚ
ಯುಗಾಷ್ಟಕಾಃ
ಲಘವಃ ಷಷ್ಟ್ಯುತ್ತರಂ ಚತುಃಶತಂ ಚತು
ರಂಶಿಕಾಃ
ಶೇಷಾಸ್ತು ರಾಜಪುತ್ರಾಶ್ಚ ಅಸಂಖ್ಯಾತಾಸ್ತ
ಥೈವಚ[37]

ಅಪರಾಜಿತಪೃಚ್ಛಾ ಗ್ರಂಥದ ಕರ್ತೃವು, ಆಸ್ಥಾನದಲ್ಲಿ ನಾಲ್ಕುಜನ ಮಂಡಲೇಶ್ವರರು, ಹನ್ನೆರಡು ಮಂದಿ ಮಂಡಲಿಕರು, ಹದಿನಾರುಮಂದಿ ಮಹಾಸಾಮಂತರು, ಮೂವತ್ತೆರಡು ಮಂದಿ ಸಾಮಂತರುಗಳಿಗೆ ಅವಕಾಶ ಕಲ್ಪಿಸಿದ್ದಾನೆ. ಇವರೊಂದಿಗೆ ಲಘು ಸಾಮಂತರು, ಚತುರಂಶಿಕರು ಮತ್ತು ರಾಜಕುಮಾರರು ಸಭಾಸದರೆಂದು ವರ್ಣಿಸಿದ್ದಾನೆ. ರಾಜ ಅಥವಾ ಚಕ್ರವರ್ತಿಯ ಅಧೀನದಲ್ಲಿರುವ ಮಂಡಲೇಶ್ವರ ಸಾಮಂತಾದಿಗಳ ಸಂಖ್ಯೆಯನ್ನು ನಿರ್ದಿಷ್ಟಗೊಳಿಸುವುದು ಅಸಂಗತವೆನಿಸುತ್ತದೆ.

ಕವಿರತ್ನೋಕ್ತಿಯಿಂದ ಸಾಮಂತ–ಮಂಡಳಿಕ–ಮಂಡಳೇಶ್ವರ – ಚಕ್ರವರ್ತಿಗಳ ಬಗ್ಗೆ ಖಚಿತ ಅರಿವಿತ್ತು. ಅಪರಾಜಿತಪೃಚ್ಛಾ ಗ್ರಂಥದ ಪ್ರಕಾರ, ಚತುರಂಶಿಕ – ಲಘುಸಾಮಂತ – ಸಾಮಂತ – ಮಹಾಸಾಮಂತ-ಮಂಡಳಿಕ-ಮಂಡಳೇಶ್ವರ-ಚಕ್ರವರ್ತಿ ಎಂದು ಖಚಿತವಾಗಿ ಆರೋಹಣ ಕ್ರಮವನ್ನು ಗುರುತಿಸಬಹುದು.

32 ಹಿಂದೂ ಪಾಲಿಟಿ, ಬೆಂಗಳೂರು, ೧೯೬೭, ಪು. ೨೬೬
33 ಅಧ್ಯಾಯ ೧೦, ಶ್ಲೋಕ ೧೭, ಪು. ೪೭
34 ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೫೩
35 ಎ.ಕ., ಬೇಲೂರು ೧೬೬
36 ಅದೇ, ಚನ್ನರಾಯಪಟ್ಟಣ ೨೬೫
37 ಅಧ್ಯಾಯ ೭೮, ಶ್ಲೋಕ ೩೩–೩೪, ಪು. ೧೯೬

ಗ್ರಂಥಸ್ಥ ವಿವರಣೆಯನ್ನನುಸರಿಸಿ ಸಭಾಸದರ ನ್ನೊಳಗೊಂಡಂತೆ ಮೂರು ವರ್ಗಗಳಾಗಿ ವಿಂಗಡಿಸ ಬಹುದು. ಚಕ್ರವರ್ತಿ, ಅರ್ಧಪತಿ, ಮಹೀಪತಿ ಇವರು ರಾಜವರ್ಗಕ್ಕೆ ಸೇರಿದವರು ; ಮಂಡಳೇಶ್ವರರಿಂದ ಚತುರಂಶಿಕರವರೆಗೆ ಸಾಮಂತವರ್ಗಕ್ಕೆ ಸೇರಿದವರು. ದಂಡನಾಯಕ, ಪ್ರತೀಹಾರ ಹಾಗೂ ಅಮಾತ್ಯರು ಅಧಿ ಕಾರಿವರ್ಗಕ್ಕೆ ಸೇರಿದವರು.

ಸಮಸ್ತ ಭೂಮಂಡಳವನ್ನಾಳುವವನು ಚಕ್ರವರ್ತಿ ; ಅರ್ಧಭಾಗವನ್ನು ಅಧಿಪತಿ, ಮೂರನೇಒಂದು ಭಾಗವನ್ನು ಆಳುವವನು ಮಹೀಪತಿ. ಇದು ಗ್ರಾಂಥಿಕ ವಿವರಣೆ. ಇವರನ್ನೇ ಮತ್ತೊಂದೆಡೆಯಲ್ಲಿ ಮಹೀಪತಿ, ರಾಜ, ನರಾಧಿಪ ಎಂದು ಕ್ರಮವಾಗಿ ಗುರುತಿಸಲ್ಪಟ್ಟಿದೆ.

ಏಕಚ್ಛತ್ರ ಪ್ರಭೋಕ್ತಾ ಯಃ ಸಭವೇಚ್ಚ
ಮಹೀಪತಿಃ[38]

ಚಕ್ರವರ್ತಿಯ ನಂತರ ರಾಜ, ನಂತರ ಮಂಡಳೇಶ್ವರ, ಇದು ಸಾಮಾನ್ಯ ಅವರೋಹಣಕ್ರಮ. ಚಾಲುಕ್ಯ ಹಾಗೂ ಹೊಯ್ಸಳರ ಕಾಲದಲ್ಲಿ ಚಕ್ರವರ್ತಿಯ ನಂತರ ಮಂಡಳೇಶ್ವರರನ್ನು ಗುರುತಿಸುವುದೇ ಅಂದು ಜಾರಿಯಲ್ಲಿದ್ದ ವ್ಯವಸ್ಥೆ. ರಾಜರ ಪ್ರಸ್ತಾಪವು ಅಪ ರೂಪವೇ. 'ಮಹಾರಾಜಾಧಿರಾಜ' ಎಂದು ಬಿರುದು ಬಾವಲಿಗಳಲ್ಲಿ ಸೇರಿರುವುದೇ ಹೆಚ್ಚು. ಉದಾಹರಣೆಗೆ, "ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವ ರನುಮಪ್ಪ ಹೊಯ್ಸಳ ಶ್ರೀ ವೀರವಲ್ಲಾಳ ದೇವರು" ಎಂಬ ಒಕ್ಕಣೆಯುಂಟು.[39] ಹೊಯ್ಸಳ ಅರಸರು ಮೊದಲಿಗೆ ಮಹಾಮಂಡಳೇಶ್ವರರೆನಿಸಿದ್ದು ನಂತರ ಚಕ್ರ ವರ್ತಿಗಳೆನಿಸಿದರು. ಮಂಡಳೇಶ್ವರರಿಗೂ ಮಹಾಮಂಡ ಳೇಶ್ವರರಿಗೂ ಭೇದವಿಲ್ಲವೆನಿಸಿದೆ. ಶಾಸನಗಳು ಮಹಾ ಮಂಡಲೇಶ್ವರ ಎಂದು ಸಂಭೋದಿಸಿವೆ. ಒಂದೇ ಶಾಸನ ದಲ್ಲಿ ರಾಜ್ಯವಾಳುತ್ತಿರುವ ಚಕ್ರವರ್ತಿಯನ್ನೂ ನಂತರ ಅಧೀನ ಮಹಾಮಂಡಳೇಶ್ವರನನ್ನೂ ಗುರುತಿಸುವುದು ಸಾಮಾನ್ಯವೆನಿಸಿದೆ. ಇಂತಹ ಹಲವು ಉದಾಹರಣೆ ಗಳಿವೆ.

ಗ್ರಾಂಥಿಕ ವಿವರಣೆಗಳ ಪ್ರಕಾರ ಒಂದು ಲಕ್ಷ ಹಳ್ಳಿ ಗಳನ್ನು ಆಳುತ್ತಿದ್ದವನು ಮಹಾಮಂಡಳೇಶ್ವರ ಮತ್ತು ಅರ್ಧಲಕ್ಷ ಗ್ರಾಮಗಳ ಅಧಿಪತಿ ಮಂಡಲಿಕ :

ಲಕ್ಷಗ್ರಾಮಾಧಿಪೋ ಯಸ್ತು ಸ ಮಹಾಮಂಡ
ಲೇಶ್ವರಃ
ಲಕ್ಷಾರ್ಧಂ ಯಸ್ತು ಭುಕ್ತೋ ಸ ಮಂಡ
ಲಿಕೋಽಭಿದಾನತಃ[40]

ಈರೀತಿ ವಿವರಣೆಗಳು ಸಾಮಂತಾದಿಗಳಿಗೂ ಲಭ್ಯವಿದ್ದು ಅಧಿಕಾರ ಅಂತಸ್ತುಗಳ ಆರೋಹಣ, ಅವ ರೋಹಣ ಕ್ರಮ ಗುರುತಿಸಲು ನೆರವಾಗಿದೆಯೇ ಹೊರತೂ ಮತ್ತೇನೂ ಉಪಯೋಗವಾಗದು.

ಮಂಡಲೀಕರಿಂದ ಅಧಿಕಾರ ನಿರ್ವಹಣೆ ಹೊಯ್ಸ ಳರ ಕಾಲದಲ್ಲಿ ಕಡಿಮೆಯೆಂದೇ ಗಮನಿಸಬಹುದು. ಒಮ್ಮೊಮ್ಮೆ "ದಕ್ಷಿಣಚಕ್ರವಲ್ಲಭ ಸಭಾರತ್ನ ಪ್ರದೀಪ ಜಗತ್ಪ್ರಸುತ್ಯಾಕೃತಿ ಮಂತ್ರಿ ಮಂಡಳಿಕ ದಂಡಾದೀಶ"[41] ಇತ್ಯಾದಿಯಾಗಿ ಉಲ್ಲೇಖಿಸಿದ್ದನ್ನು ಗಮನಿಸಬಹುದು.

ಮಹಾಸಾಮಂತ ಮತ್ತು ಸಾಮಂತರನ್ನು ಶಾಸನ ವೊಂದು ಒಟ್ಟಿಗೆ ಗುರುತಿಸಿದೆ :

ಶ್ರೀಮನುಮಹಾಸಾಮಂತ ಕೆಚ್ಚನ ಮಾಚಿ
ಯನ ಮಗ
ಶ್ರೀಮತುಸಾಮಂತ ಘಸಣೆ ಮಹದೇವ
ನಾಯಕಂ[42]

ಮಹಾಸಾಮಂತ ಬಂಕೈಯನೆನ್ನುವನು ಸೇವನಗೆರೆ ಹನ್ನೆರಡನ್ನು ಆಳುತ್ತಿದ್ದುದನ್ನು ಶಾಸನವೊಂದು ಬಣ್ಣಿ ಸಿದೆ.[43]

---

38 ಅದೇ, ಅಧ್ಯಾಯ ೮೧, ಶ್ಲೋಕ ೨, ಪು. ೨೦೩
39 ಎ.ಕ., ಹಾಸನ ೫೧
40 ಅಪರಾಜಿತಪೃಚ್ಛಾ, ಅಧ್ಯಾಯ ೮೧, ಶ್ಲೋಕ ೫, ಪು. ೨೦೨
41 ಎ.ಕ., ಚನ್ನರಾಯಪಟ್ಟಣ ೧೭೯
42 ಅದೇ, ಅರಸೀಕೆರೆ ೪೨
43 ಅದೇ, ಅರಸೀಕೆರೆ ೩೧

ಸಾಮಂತ ಗೋವಿದೇವ ಮಗರನಾಡು ಮೂನೂರ ಮೊದಲವಾಡ ಕಳಿಕಟ್ಟಿ"[44]ಯನ್ನೂ "ಕೆರೆಗೋಡು ನಾಡಾಳ್ವ ಮಹಾಪಸಾಯ್ತ ಸಾಮನ್ತ"[45] ನನ್ನೂ ಶಾಸನೋಕ್ತಿಗಳಿಂದ ಗುರುತಿಸಬಹುದು.

ಲಘುಸಾಮಂತ ಹಾಗೂ ಚತುರಂಶಿಕರು ಗ್ರಂಥಸ್ಥರಾಗಿದ್ದಾರೆಯೇ ಹೊರತು ಶಾಸನಗಳಲ್ಲಿ ಪ್ರವೇಶಿಸಿಲ್ಲ.

ಶುಕ್ರನೀತಿ ಗ್ರಂಥವು ಕರಸಂಗ್ರಹಣೆಯನ್ನು ಮೂಲವಮಾನವಾಗಿ ಪರಿಗಣಿಸಿ ಅಧಿಕಾರಕ್ರಮವನ್ನು ಈ ರೀತಿ ಗುರುತಿಸಿದೆ:

ನಾಯಕ - ಸಾಮಂತ–ಮಂಡಲಿಕ-ರಾಜ –ಮಹಾರಾಜ-ಸ್ವರಾಟ-ಸಾಮ್ರಾಟ-ಸಾರ್ವಭೌಮ.

ಶತಗ್ರಾಮಾಧಿಪೋ ಯಸ್ತು ಸೋಪಿ ಸಾಮಂತ ಸಂಜ್ಞಕಃ
ಅಧಿಕೃತೋ ದಶಗ್ರಾಮೇ ನಾಯಕಃ ಸಚ ಕೀರ್ತಿತಃ[46]

ಈ ರೀತಿ ವಿವರಣೆಯೂ ಶುಕ್ರನೀತಿ ಗ್ರಂಥದಲ್ಲಿದೆ. ಈ ವಿವರಣೆಗಳಿಗೂ ಅಪರಾಜಿತಪೃಚ್ಛಾ ಗ್ರಂಥದ ವಿವರಣೆಗೂ ಸಾಕಷ್ಟು ವ್ಯತ್ಯಾಸವಿದೆ. ಇವನ್ನು ಕೇವಲ ತಿಳುವಳಿಕೆಗಾಗಿ ನೆನೆಯಬೇಕೇ ಹೊರತು ಮತ್ತೇನೂ ಉಪಯೋಗವೆನಿಸದು.

ಅಪರಾಜಿತಪೃಚ್ಛಾ ಗ್ರಂಥದ ಕೆಳಕಂಡ ಸಾಲುಗಳು ಹೊಯ್ಸಳ ಶಾಸನಗಳ ಪ್ರಶಸ್ತಿ ಪರಾಕುಗಳಂತೆಯೇ ಇವೆ ಎಂದು ಗಮನಿಸಬಹುದು :

ಮಹಾರಾಜಾಧಿರಾಜಶ್ಚ ಪರಮೇಶ್ವರ ಸಂಜ್ಞಿತಃ
ಭುವನೈಕನಾಥೋ ಮಹಾರಾಜ ಚಕ್ರಚೂಡಾಮಣಿಃ
ಭೂಪಾಲಃ ಸರ್ವಕಲಾಕುಶಲಃ ಉಮಾಪತಿ ವರಲಬ್ಧ ತೇಜಾಃ
ತಥ್ಯಾನ್ಯನೃಪಾದ್ಯ ಮುಖದರ್ಪಣೋ ಧರ್ಮಾಧಿಪ್ರಶಸ್ಯಾವತಾರಃ[47]

ಈ ಸಾಲುಗಳು ಹೊಯ್ಸಳ ವಿಷ್ಣುವರ್ಧನನನ್ನು 'ಏಕಾದಶಾವತಾರನ್'[48] ಎಂದು ಗುರುತಿಸಿದ್ದನ್ನು ನೆನಪಿಸದಿರವು.

---

44 ಅದೇ, ಅರಸೀಕೆರೆ ೫೫

45 ಅದೇ, ಚನ್ನರಾಯಪಟ್ಟಣ ೨೬೫

46 ಪಂಡಿತ ಬ್ರಹ್ಮಾನಂದ ಮಿಶ್ರಾ (ಸಂ.) : ಶುಕ್ರನೀತಿ, ವಾರಣಾಸಿ, ೧೯೬೮, ಅಧ್ಯಾಯ ೧, ಶ್ಲೋಕ ೧೯೦, ಪು.೨೮

47 ಅಧ್ಯಾಯ ೭೮, ಶ್ಲೋಕ ೩೯-೪೦, ಪು. ೧೯೬

48 ಎ. ಕ., ಬೇಲೂರು ೭೧